CPMG / KA / BG-GPO/13 / 2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಫೆಬ್ರವರಿ ೧೯, ೨೦೦೪ (ಮಾಘ ೩೦, ಶಕ ವರ್ಷ ೧೯೨೫) | ಸಂಚಿಕೆ ೦೮ |
|---|---|---|

## ಭಾಗ–೪–ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಒಸಾಇ 33 ಟಿಆರ್‌ಸಿ 2003 ಬೆಂಗಳೂರು, ದಿನಾಂಕ: 28ನೇ ಜನವರಿ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಒಸಾಇ 314 ಟಿಆರ್‌ಎ 2003(ಭಾ), ದಿನಾಂಕ: 14.01.2004 ರನ್ವಯ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ವಿಭಾಗಗಳ ಸಲಹಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನಾಮಕರಣ ಮಾಡಲು ಅವಕಾಶವಿದ್ದು, ಈ ಕೆಳಗೆ ನಮೂದಿಸಿರುವ ಅಧಿಕಾರೇತರ ಸದಸ್ಯರನ್ನು ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯ ವಿಭಾಗೀಯ ಸಲಹಾ ಸಮಿತಿಯ ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮಕರಣ ಮಾಡಿ ನೇಮಕ ಮಾಡಲಾಗಿದೆ.

| ಕ್ರಮಸಂಖ್ಯೆ | ವಿಭಾಗದ ಹೆಸರು | ನಾಮಕರಣಗೊಂಡವರ ಹೆಸರು |
|---|---|---|
| 1. | ಹುಬ್ಬಳ್ಳಿ | ಶ್ರೀ ಡಿ. ಟಿ. ಪಾಟೀಲ್<br>ಕಮರಿಪೇಟೆ, ಹುಬ್ಬಳ್ಳಿ. |
| 2. | ಬಿಜಾಪುರ | ಶ್ರೀ ಶಹಜಹಾನ್,<br>ಹುರ್ಸೇ ಭಾಷಾ ಮುಲ್ಲಾ, ಶೇಖೆ ಕಾಲೋನಿ, ಬಿಜಾಪುರ. |
| 3. | ಹಾವೇರಿ | ಶ್ರೀ ವಿಷ್ಣು ವಿ. ಘಾಸ್ತೆ,<br>ಅಂಚೆ ಕಛೇರಿ ಹತ್ತಿರ, ರಾಣೆಬೆನ್ನೂರ್. |
| 4. | ಶಿರಸಿ | ಶ್ರೀ ವಿನೋದ್ ಬಿ. ನಾಯಕ್<br>ಮಾಜಿ ಜಿಲ್ಲಾ ಪಂಚಾಯತ್ ಸದಸ್ಯರು, ಅಂಕೋಲ, ಉತ್ತರ ಕನ್ನಡ ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಲಕ್ಷ್ಮೀಕಾಂತ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ.

ಪಿಆರ್.66

**DEPARTMENT OF PERSONNEL AND ADMINI STRATIVE REFORMS SECRETARIAT**
**NOTIFICATION**
**No: DPAR 30 SFP 2001 Bangalore, Dated: 27th January 2004**

The Government of India, Ministry of Environment and Forests order No. 17013/08:2001-IFS-11 dated: 11.12.2003 is republished hereunder.

FNo. 17013/08/2001-IFS/11
Government of India,
Ministry of Environment of Forests,

Paryavaran Bhavan, CGO Complex
Lodi Road, New Delhi-110003
Dated: the 11th December 2003

**ORDER**

The year of allotment and seniority of Shri B.M.T. Rajiv an officer of Indian Forest Service borne on Karnataka Cadre who was appointed to Indian Forest Service vide notification of even number dated: 24th December, 2002 (on basis of Select List-2001) is required to be determined in terms of provisions of Rules 3(3)(ii) of Indian Forest Service (Regulations of Seniority) (Amendment) Rules, 1997. The details are as under

| Sl.No. | Name | Year of Select List | Completed year of service in SFS | Total Weightage Allowed |
|---|---|---|---|---|
| 1. | Shri B.M.T. Rajiv | Select List 2001 | 13 years | 4 years |

Accordingly, the year of allotment and placement as determined in terms of provisions of Rules 3 (3)(ii) and 4(ii) of Indian Forest Service (Regulation of Seniority) Rules (Amendment) 1997 is as under

| Sl. No. | Name | Year of Allotment | Placement |
|---|---|---|---|
| 1 | Shri B.M.T. Rajiv | 1997 | Jr Most D.R. (i.e. below Saswathi Mishra RR 1997) |

**G. Devnani**
Under Secretary to Govt. of India.

By Order and in the Name of the Governor of Karnataka,
**B. V. KUMARASWAMY**
Under Secretary to Government, DPAR (Services-I).

PR-65

**ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಹೆಚ್‌ಟಿಡಿ 35 ಟಿಆರ್‌ವಿ 2003 ಬೆಂಗಳೂರು, ದಿನಾಂಕ: 20ನೇ ಜನವರಿ 2004**

ಕರ್ನಾಟಕ ಮೋಟಾರು ವಾಹನಗಳ ನಿಯಮಗಳು 1989ನ್ನು ಮರು ತಿದ್ದುಪಡಿ ಮಾಡಲು ಉದ್ದೇಶಿಸಿದ್ದು, ಮೋಟಾರು ವಾಹನಗಳ ಕಾಯಿದೆ 1988 (ಕೇಂದ್ರ ಕಾಯಿದೆ 59/1988)ರ ಅಧಿನಿಯಮ 212 ಹಾಗೂ ಉಪ ಅಧಿನಿಯಮ (1)ರಡಿ ಪ್ರಕಟಿಸುವ ಅವಶ್ಯವಿರುವುದರಿಂದ ಅಧಿಸೂಚನೆ ಸಂಖ್ಯೆ ಹೆಚ್‌ಟಿಡಿ 35 ಟಿಆರ್‌ವಿ 2003, ದಿನಾಂಕ: 7.8.2003ರ ಮೂಲಕ ಕರ್ನಾಟಕ ರಾಜ್ಯ ಪತ್ರದ ಭಾಗ-4(ಎ)ರಲ್ಲಿ, ಪ್ರಕಟಿಸಿ, ಇದರಿಂದ ಬಾಧಿತರಾಗುವ ಹಾಗೂ ಇತರೆ ಸಾರ್ವಜನಿಕರಿಂದ ಆಕ್ಷೇಪಣೆ ಸಲಹೆಗಳನ್ನು ಆಹ್ವಾನಿಸಲಾಯಿತು;

ಸದರಿ ರಾಜ್ಯ ಪತ್ರವನ್ನು ದಿನಾಂಕ: 20.8.2003 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಲಾಯಿತು.

ರಾಜ್ಯ ಸರ್ಕಾರಕ್ಕೆ ಈ ಬಗ್ಗೆ ಸಾರ್ವಜನಿಕರಿಂದ ಯಾವುದೇ ಆಕ್ಷೇಪಣೆಗಳು/ಸಲಹೆಗಳು ಬಂದಿರುವುದಿಲ್ಲ.

ಆದುದರಿಂದ ಸರ್ಕಾರವು ಮೋಟಾರು ವಾಹನಗಳ ಕಾಯಿದೆ 1988ರ (ಕೇಂದ್ರ ಅಧಿನಿಯಮ 59/1988) ಅಧಿನಿಯಮ 212 ಹಾಗೂ 111ರಡಿ ಇರುವ ಪ್ರದತ್ತವಾದ ಅಧಿಕಾರವನ್ನು, ಚಲಾಯಿಸಿ ಕರ್ನಾಟಕ ಮೋಟಾರು ವಾಹನಗಳ ನಿಯಮಗಳು 1989ಕ್ಕೆ ಕರ್ನಾಟಕ ಸರ್ಕಾರವು ಈ ಕೆಳಕಂಡ ತಿದ್ದುಪಡಿ ತಂದಿದೆ.

ನಿಯಮಗಳು

1. **ಶೀರ್ಷಿಕೆ ಮತ್ತು ಪ್ರಾರಂಭ:** (1) ಈ ನಿಯಮಗಳನ್ನು ಕರ್ನಾಟಕ ಮೋಟಾರು ವಾಹನಗಳ (ತಿದ್ದುಪಡಿ) ನಿಯಮಗಳು, 2003 ಎಂದು ಕರೆಯತಕ್ಕದ್ದು.
2. ಸರ್ಕಾರದ ರಾಜ್ಯ ಪತ್ರದಲ್ಲಿ ಇವುಗಳನ್ನು ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.
3. **231ಬಿ ತಿದ್ದುಪಡಿ:** ಕರ್ನಾಟಕ ಮೋಟಾರು ವಾಹನಗಳ ನಿಯಮಗಳು, 1989ರ 231ಬಿಯ ನಿಯಮದಲ್ಲಿ, (13)ನೇ ಉಪ ನಿಯಮದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ.

"(14) ತಪಾಸಣಾ ಸಾಧನ ಸಲಕರಣೆಯ ತಯಾರಕನು ಅಥವಾ ವ್ಯಾಪಾರಿಯು ಒದಗಿಸಿದ ವಾರ್ಷಿಕ ನಿರ್ವಹಣೆಯ ಕರಾರಿನಲ್ಲಿ ಒಳಗೊಂಡಿರುವಂಥ ಸಾಧನ ಸಲಕರಣೆಗಳಾಗಿರುವ ಹೊರತು, ರಾಜ್ಯ ಸರ್ಕಾರವು ನಿರ್ವಹಿಸುತ್ತಿರುವ ಅಂಥ ತಪಾಸಣಾ ಸಾಧನ ಸಲಕರಣೆಗಳಿಂದ ಯಾವುದೇ ತಪಾಸಣೆಯನ್ನು ನಡೆಸತಕ್ಕದ್ದಲ್ಲ"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಲಕ್ಷ್ಮೀಕಾಂತ**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ಒಳಾಡಳಿತ ಮತ್ತು ಸಾರಿಗೆ ಇಲಾಖೆ, (ಸಾರಿಗೆ).

ಪಿಆರ್.67

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಕೃತೋಇ 52 ಕೃಪಇ 2003 ಬೆಂಗಳೂರು, ದಿನಾಂಕ: 29ನೇ ಜನವರಿ 2004**

ದಿನಾಂಕ: 5.1.2004 ರಂದು ಹೊರಡಿಸಲಾದ ಇದೇ ಸಮಸಂಖ್ಯೆಯ ಅಧಿಸೂಚನೆಯಲ್ಲಿನ ಕ್ರಮಸಂಖ್ಯೆ 50ರಲ್ಲಿ ಶ್ರೀ ಎ.ಎ. ಬಿರಾದಾರ, ಕೃಷಿ ಅಧಿಕಾರಿ ಜಲಾನಯನ ಅಭಿವೃದ್ಧಿ ಇಲಾಖೆ, ಚಿಂಚೋಳಿ ಇವರ ನಿವೃತ್ತಿ ದಿನಾಂಕ: 31.1.2006 ಇರುವುದರಿಂದ ಇವರನ್ನು ದಿನಾಂಕ: 31.1.2004 ರಂದು ವಯೋ ನಿವೃತ್ತಿ ಹೊಂದುವಂತೆ ಆದೇಶಿಸಿರುವುದನ್ನು ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಎಸ್. ದೇಸಾಯಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

ಪಿಆರ್.68

## ಸಮಾಜ ಕಲ್ಯಾಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಕಇ 03 ಎಸ್‌ಬಿಆರ್ 2004 ಬೆಂಗಳೂರು, ದಿನಾಂಕ: 27ನೇ ಜನವರಿ 2004**

ಕರ್ನಾಟಕ ಭಿಕ್ಷಾಟನೆ ನಿಷೇಧ ಕಾಯ್ದೆ 1975 ರ ಕಲಂ 4ರ ಉಪ ಕಲಂಗಳು 2(ಎ) ಮತ್ತು (3) ರಲ್ಲಿನ ಪ್ರದತ್ತವಾದ ಅಧಿಕಾರದನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ ಸಕಇ 28 ಎಸ್‌ಬಿಆರ್ 2002 ದಿನಾಂಕ: 10.10.2002ನ್ನು ಭಾಗಶಃ ಮಾರ್ಪಡಿಸಿ ಕೇಂದ್ರ ಪರಿಹಾರ ಸಮಿತಿ ಬೆಂಗಳೂರು (C.R.C) ಇಲ್ಲಿಗೆ ಕ್ರಮ ಸಂಖ್ಯೆ: 2 ರಲ್ಲಿ ಶ್ರೀಯುತ ತಿಮ್ಮಪ್ಪ ಅಧ್ಯಕ್ಷರು, ಬಿ.ಸಿ.ಸಿ ಹಾರೋಹಳ್ಳಿ ಬೆಂಗಳೂರು ಗ್ರಾಮಾಂತರ ಇವರ ಬದಲಿಗೆ ಶ್ರೀಯುತ ಷಫೀವುಲ್ಲಾ ಬೇಗ್ ಲಷ್ಕರ್ ಮೊಹಲ್ಲಾ ಮೈಸೂರು ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಸದರಿ ಮುಂದಿನ ಆದೇಶದವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಮೆಹಬೂಬ್ ಫೀರಾನ್**
ಸರ್ಕಾರದ ಉಪ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

ಪಿಆರ್.69

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಪಸಂಮೀ 28 ಮೀಇಯೋ 2004 ಬೆಂಗಳೂರು, ದಿನಾಂಕ: 29ನೇ ಜನವರಿ 2004**

ಕರ್ನಾಟಕ ಕರಾವಳಿ ಮೀನುಗಾರಿಕೆ (ನಿಯಂತ್ರಣ) ಅಧಿನಿಯಮ 1986ರ ನಿಯಮ 3(ಸಿ) ಮತ್ತು 3(2)(ಎ)(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದ ಕರಾವಳಿ ಪ್ರದೇಶದಲ್ಲಿ **"ಶಾರ್ಕ್"** ಮೀನುಗಳನ್ನು ಯಾವುದೇ ರೀತಿಯ ಮೀನುಗಾರಿಕೆ ಸಾಧನಗಳನ್ನು ಬಳಸಿ ಹಿಡಿಯುವುದನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ನಿಷೇಧಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ. ಕಮಲಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

ಪಿಆರ್.70

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 09 ಸಿಎಸ್‌ಎಸ್ 2004 ಬೆಂಗಳೂರು, ದಿನಾಂಕ: 21ನೇ ಜನವರಿ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮ ನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಚಾಮರಾಜನಗರ ಜಿಲ್ಲೆ, ಗುಂಡ್ಲುಪೇಟೆ ತಾಲ್ಲೂಕಿನ ಹಿರೀಕಾಟಿ ಹರಿಜನ:ಗಿರಿಜನ ಮತ್ತು ಇತರೇ ಅರೆಬಂಡೆ ಕೆಲಸಗಾರರ ಸಹಕಾರ ಸಂಘ ನಿ., ಹಿರೀಕಾಟಿ ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1) ಶ್ರೀ ಪಾಪಯ್ಯ, ಬಿನ್ ಚಿಕ್ಕಗಂಡಯ್ಯ, ಚಿಕ್ಕಾಟಿ
2) ಶ್ರೀ ಸತೀಶ್ ಬಿನ್ ನಂಜಪ್ಪ, ಹಿರೀಕಾಟಿ
3) ಶ್ರೀಮತಿ ನಾಗಮ್ಮ ಕೋಂ ಕಾಳೇಗೌಡ, ಹಿರೀಕಾಟಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಎಸ್. ಹುಬ್ಬಾಚಾರಿ**
ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

ಪಿಆರ್.71

## ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 10 ಸಿಎನ್‌ಎಸ್ 2004 ಬೆಂಗಳೂರು, ದಿನಾಂಕ: 21ನೇ ಜನವರಿ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮ ನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಚಾಮರಾಜನಗರ ಜಿಲ್ಲೆ, ಗುಂಡ್ಲುಪೇಟೆ ತಾಲ್ಲೂಕಿನ ರಂಗೂಪುರ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕ್ ನಿ., ರಂಗೂಪುರ ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1) ಶ್ರೀ ಮಹದೇವಯ್ಯ ಬಿನ್ ಬೋಗಮಾದಯ್ಯ
2) ಶ್ರೀ ಆರ್. ಎನ್. ಸಿದ್ದಪ್ಪ ಬಿನ್ ಲೇ. ನಂಜುಂಡಪ್ಪ
3) ಶ್ರೀಮತಿ ದುಂಡಮ್ಮ ಕೋಂ ಬೀಟೇಗೌಡ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

ಪಿಆರ್.72

## ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 03 ಸಿಎನ್‌ಎಸ್ 2004 ಬೆಂಗಳೂರು, ದಿನಾಂಕ: 21ನೇ ಜನವರಿ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮ ನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಉತ್ತರ ಕನ್ನಡ ಜಿಲ್ಲೆ ಸಿದ್ದಾಪುರ ತಾಲ್ಲೂಕಿನ ಇಟಗಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಇಟಗಿ ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1) ಶ್ರೀ ರಾಮಕೃಷ್ಣ ಮಹದೇವ ಹರಿಜನ, ಅಂಚೆ ಮತ್ತು ಸ್ಥಳ ಇಟಗಿ, ಸಿದ್ದಾಪುರ ತಾಲ್ಲೂಕು
2) ಶ್ರೀ ಕೃಷ್ಣ ವೆಂಕಟರಮಣ ಶೆಟ್ಟಿ, ಅಂಚೆ ಮತ್ತು ಸ್ಥಳ ಇಟಗಿ, ಸಿದ್ದಾಪುರ ತಾಲ್ಲೂಕು
3) ಶ್ರೀಮತಿ ಸುಲೋಚನಾ ರಾಮಚಂದ್ರ ಭಟ್, ಅಂಚೆ ಮತ್ತು ಸ್ಥಳ ಇಟಗಿ, ಸಿದ್ದಾಪುರ ತಾಲ್ಲೂಕು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

ಪಿಆರ್.73

## ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 27 ಸಿಎನ್‌ಎಸ್ 2001 ಬೆಂಗಳೂರು, ದಿನಾಂಕ: 21ನೇ ಜನವರಿ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 27 ಸಿಎನ್‌ಎಸ್ 2001 ದಿನಾಂಕ: 16.01.2001 ರಲ್ಲಿ ಮೈಸೂರು ಜಿಲ್ಲೆ ಪಿರಿಯಾಪಟ್ಟಣ ತಾಲ್ಲೂಕಿನ ಮಾಕೋಡು ವ್ಯವಸಾಯ ಸೇವಾ ಸಹಕಾರ ಸಂಘ ನಿ., ಮಾಕೋಡು ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡವರುಗಳನ್ನು ಮೈಸೂರು ಜಿಲ್ಲೆ ಪಿರಿಯಾಪಟ್ಟಣ ತಾಲ್ಲೂಕಿನ ಮಾಕೋಡು ವ್ಯವಸಾಯ ಸೇವಾ ಸಹಕಾರ ಸಂಘ ನಿ., ಮಾಕೋಡು ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1) ಶ್ರೀಮತಿ ಕಿಕ್ಕೇರಮ್ಮ ಕೋಂ ಕುಳ್ಳೇಗೌಡ, ಮಂಟಿ ಕೊಪ್ಪಲು, ಮಾಕೋಡು ಅಂಚೆ
2) ಶ್ರೀ ಶಿವಣ್ಣೇಗೌಡ ಬಿನ್ ಲಕ್ಕೇಗೌಡ, ಕೆ.ಎಂ. ಕೊಪ್ಪಲು ಮಾಕೋಡು ಅಂಚೆ
3) ಶ್ರೀ ಕೆಂಪಯ್ಯ ಬಿನ್ ಕೆದರಯ್ಯ, ಎಂ. ಶೆಟ್ಟಿಹಳ್ಳಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

ಪಿಆರ್.74

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 61 ಸಿಎಸ್‌ಎಸ್ 2001 ಬೆಂಗಳೂರು, ದಿನಾಂಕ: 8ನೇ ಜನವರಿ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 61 ಸಿಎಸ್‌ಎಸ್ 2001 ದಿನಾಂಕ: 22.02.2001 ರ ಅನುಬಂಧದ ಕ್ರಮಸಂಖ್ಯೆ 6 ರಲ್ಲಿ ಉತ್ತರ ಕನ್ನಡ ಜಿಲ್ಲೆ ಹೊನ್ನಾವರ ತಾಲ್ಲೂಕಿನ ಶ್ರೀ ಕರಿಖಾನ ಪರಮೇಶ್ವರಿ ಸೇವಾ ಸಹಕಾರಿ ಬ್ಯಾಂಕ್ ನಿ., ಸಾಲಕೋಡ ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀಮತಿ ಸಾವಿತ್ರಿ ಗಣಪತಿ ಆಚಾರಿ, ಕೊಂಡಾಕುಳಿ, ಸಾಲಕೋಡ ಅಂಚೆ ರವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶ್ರೀಮತಿ ಸಾವಿತ್ರಿ ಮಹಾಬಲೇಶ್ವರ ಶೆಟ್ಟಿ ಸಾ: ಕವಲಕ್ಕಿ, ಹೊನ್ನಾವರ ತಾಲ್ಲೂಕು ಇವರನ್ನು ಉತ್ತರ ಕನ್ನಡ ಜಿಲ್ಲೆ ಹೊನ್ನಾವರ ತಾಲ್ಲೂಕು ಶ್ರೀ ಕರಿಖಾನ ಪರಮೇಶ್ವರಿ ಸೇವಾ ಸಹಕಾರ ಬ್ಯಾಂಕ್ ನಿ., ಸಾಲಕೋಡ ಇದರ ಆಡಳಿತ ಮಂಡಳಿಯ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ಹುಚ್ಚಾಚಾರಿ**

ಪಿಆರ್.75

ವಿಶೇಷ ಕರ್ತವ್ಯಾಧಿಕಾರಿ,

ಸಹಕಾರ ಇಲಾಖೆ.

**ಲೋಕೋಪಯೋಗಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಲೋಇ 130 ಪಿಪಿಎಂ 2003 ಬೆಂಗಳೂರು, ದಿನಾಂಕ: 30ನೇ ಜನವರಿ 2004**

"ಕರ್ನಾಟಕ ಸರ್ಕಾರ (ಸರ್ಕಾರಿ ವಸತಿಗೃಹಗಳ ಹಂಚಿಕೆ) ನಿಯಮಗಳು, 1999" ರ ಪ್ರಕಾರ ಹಾಗೂ 1999ರ ನಿಯಮ ಜಾರಿಗೊಳಿಸುವ ಪೂರ್ವದಲ್ಲಿದ್ದ ಹಾಲಿ ನಿಯಮಗಳ ಮೇರೆಗೆ ಸರ್ಕಾರಿ ವಸತಿ ಗೃಹಗಳ ಹಂಚಿಕೆ ಪಡೆದಿರುವವರು 1999ರ ನಿಯಮ 5(10) ರನುಸಾರ, ಇದೇ ನಿಯಮದ 10ರಲ್ಲಿ ನಿರ್ದಿಷ್ಟಪಡಿಸಿರುವ ಸನ್ನಿವೇಶದಿಂದ ಯಾವುದೇ ಕಾರಣಗಳಿಗಾಗಿ ಹಂಚಿಕೆ ಅವಧಿಕೊನೆಗೊಳ್ಳದ ಹೊರತು ಈ ಕೆಳಗೆ ನಿರ್ದಿಷ್ಟಪಡಿಸಿದ ಗರಿಷ್ಟ ಅವಧಿಗೆ ವಾಸಿಸಲು ಅರ್ಹರಾಗಿರುತ್ತಾರೆ.

1. ಸಮೂಹ-ಎ ಮತ್ತು ಬಿ ವರ್ಗದ ಅಧಿಕಾರಿಗಳು ಹಂಚಿಕೆ ಪಡೆದ ದಿನಾಂಕದಿಂದ ಐದು ವರ್ಷಗಳು.
2. ಸಮೂಹ-ಸಿ ಮತ್ತು ಡಿ ವರ್ಗದ ನೌಕರರು ಹಂಚಿಕೆ ಪಡೆದ ದಿನಾಂಕದಿಂದ ಎಂಟು ವರ್ಷಗಳು.

ಈ ರೀತಿ ಗೊತ್ತುಪಡಿಸಿದ ಅವಧಿಯು ದಿನಾಂಕ: 22.1.2004ಕ್ಕೆ ಕೊನೆಗೊಂಡಿದೆ. ಸರ್ಕಾರಿ ವಸತಿಗೃಹಗಳ ಕ್ಷೇಮಾಭಿವೃದ್ಧಿ ಸಂಘಗಳು ಸರ್ಕಾರಕ್ಕೆ ಮನವಿ ಸಲ್ಲಿಸಿ, ಮೇಲ್ಕಂಡಂತೆ ಕೊನೆಗೊಂಡ ಗರಿಷ್ಟ ಅವಧಿಯನ್ನು ವಿಸ್ತರಿಸುವಂತೆ ಕೋರಿರುತ್ತವೆ. ಸರ್ಕಾರವು ಈ ಕೋರಿಕೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, "ಕರ್ನಾಟಕ ಸರ್ಕಾರ (ಸರ್ಕಾರಿ ವಸತಿಗೃಹಗಳ ಹಂಚಿಕೆ) ನಿಯಮಗಳು. 1999"ರ ನಿಯಮ 5 ರ ಉಪ ನಿಯಮ 10ಕ್ಕೆ ತಿದ್ದುಪಡಿ ತರುವುದನ್ನು ಬಾಕಿ ಇಟ್ಟು, ಸದರಿ ನಿಯಮ 10 ರಲ್ಲಿ ನಿರ್ದಿಷ್ಟಪಡಿಸಿರುವ ಸನ್ನಿವೇಶಗಳಿಗೆ ಹಂಚಿಕೆ ಅವಧಿ ಕೊನೆಗೊಳ್ಳುವ ಷರತ್ತಿಗೊಳಪಟ್ಟು, ಬೆಂಗಳೂರಿನಲ್ಲಿ ಸೇವೆಯಲ್ಲಿ ಮುಂದುವರಿದ: ಮುಂದುವರಿಯುವ

ಸರ್ಕಾರಿ ವಸತಿಗೃಹಗಳ ಹಂಚಿಕೆ ಪಡೆದಿರುವ ಎಲ್ಲಾ ಸಮೂಹದ ಅಧಿಕಾರಿ: ನೌಕರರು ದಿನಾಂಕ: 22.1.1999 ರ ನಿಯಮ ಜಾರಿ ಬಂದಂದಿನಿಂದ ಅಥವಾ ವಸತಿಗೃಹಗಳ ಹಂಚಿಕೆಯಾದ ದಿನಾಂಕದಿಂದ 10 ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ವಾಸಿಸಲು ಸರ್ಕಾರವು ಆದೇಶಿಸುತ್ತದೆ.

ಯಾವುದೇ ಕಾರಣಗಳಿಂದಾಗಿ ಹಂಚಿಕೆಯನ್ನು ಈ ಅವಧಿಯ ಮುನ್ನ ರದ್ದುಗೊಳಿಸುವ ಪೂರ್ಣ ಹಕ್ಕು ಸರ್ಕಾರಕ್ಕಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೀತಾ ರಮೇಶ್**

ಪಿಆರ್.77

ಸರ್ಕಾರದ ಉಪ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ

(ಸೇವೆಗಳು).

**OFFICE OF THE KARNATAKA LAW REPORTING COUNCIL**

**NOTIFICATION**

**No: LRC 28/1991 Bangalore, dated: 5th February, 2004**

In exercise of the powers conferred by sub-rule 1(b) and 1 (c) of Rule-3 of the Karnataka Law Reports Rules, 1983, the Hon'ble Chief Justice, High Court of Karnataka, Bangalore is pleased nominate Hon'ble Mr. Justice T.S. Thakur, as Member of Karnataka Law Reporting Council, for a period of one year with effect from 06.02.2004.

By Order of the Hon'ble Chief Justice-Chairman

Karnataka Law Reporting Council.

PR-78

**N. ANANDA**

Secretary.

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 12 ಸಿಎನ್‌ಎಸ್ 2000 ಬೆಂಗಳೂರು, ದಿನಾಂಕ: 29ನೇ ಜನವರಿ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 12 ಸಿಎನ್‌ಎಸ್ 2000 ದಿನಾಂಕ: 14.03.2000 ರಲ್ಲಿ ತುಮಕೂರು ಜಿಲ್ಲೆ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಯಳನಡು ವ್ಯವಸಾಯ ಸೇವಾ ಸಹಕಾರ ಸಂಘ ನಿ., ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡವರುಗಳನ್ನು ತುಮಕೂರು ಜಿಲ್ಲೆ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಯಳನಡು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕು ನಿ., ಯಳನಡು ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀಮತಿ ಕರಿಯಮ್ಮ ಕೋಂ ಗೌಡಯ್ಯ ಕಾಟಯ್ಯ, ತಮಡಿಹಳ್ಳಿ, ಗೊಲ್ಲರಹಟ್ಟಿ ಯಳನಡು ಅಂಚೆ, ಹುಳಿಯಾರು ಹೋಬಳಿ, ಚಿಕ್ಕನಾಯಕನಹಳ್ಳಿ ತಾಲ್ಲೂಕು.
2. ಶ್ರೀ ಚೌಡಯ್ಯ, ಹನುಮಂತಪುರ (ಬುಡುಬುಡುಕೆ ಹಟ್ಟಿ), ಯಳನಡು ಅಂಚೆ, ಹುಳಿಯಾರು ಚಿಕ್ಕನಾಯಕನಹಳ್ಳಿ ತಾಲ್ಲೂಕು
3. ಶ್ರೀ ಬಸೀರ್ ಸಾಬ್ ತಂದೆ ಕಲಂದರ್ ಸಾಬ್ ಯಳನಡು ಅಂಚೆ, ಹುಳಿಯಾರು ಚಿಕ್ಕನಾಯಕನಹಳ್ಳಿ ತಾಲ್ಲೂಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

ಪಿಆರ್.79

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 12 ಸಿಎನ್‌ಎಸ್ 2004 ಬೆಂಗಳೂರು, ದಿನಾಂಕ: 31ನೇ ಜನವರಿ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು, ಕೊಡಗು ಜಿಲ್ಲೆ ಸೋಮವಾರಪೇಟೆ ತಾಲ್ಲೂಕಿನ ಸೋಮವಾರಪೇಟೆ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಹೆಚ್. ಸಿ. ಮಾದಪ್ಪ ತಂದೆ: ಪೌತಿ ಚನ್ನಪ್ಪ ಸೇಗಳ್ಳಿ, ಕರ್ಕಳ್ಳಿ ಗ್ರಾಮ, ಅಂಚೆ ತಣ್ಣೀರ್‌ಹಳ್ಳ, ಸೋಮವಾರಪೇಟೆ ತಾಲ್ಲೂಕು.
2. ಶ್ರೀಮತಿ ನಿರ್ಮಲಾ ಸುರೇಶ್ ಗಂಡ: ಸುರೇಶ್, ರೇಂಜರ್ ಬ್ಲಾಕ್, ಸೋಮವಾರಪೇಟೆ
3. ಶ್ರೀ ತಿಮ್ಮಪ್ಪ ತಂದೆ: ಉಗ್ರಮೇಸ್ತ್ರಿ, ಬರ್ಜಿಗುಂಡ, ಬಳುಗುಂದ ಗ್ರಾಮ, ಕುಸುಬೂರು ಅಂಚೆ, ಸೋಮವಾರಪೇಟೆ ತಾಲ್ಲೂಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

ಪಿಆರ್.80

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 66 ಸಿಎನ್‌ಎಸ್ 2001 ಬೆಂಗಳೂರು, ದಿನಾಂಕ: 17ನೇ ಜನವರಿ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 66 ಸಿಎನ್‌ಎಸ್ 2001, ದಿನಾಂಕ: 22.2.2001 ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ಮಾಗಡಿ ತಾಲ್ಲೂಕಿನ ಕಲ್ಯಾ ವ್ಯವಸಾಯ ಸೇವಾ ಸಹಕಾರ ಸಂಘ ನಿ, ಕಲ್ಯಾ, ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರೆದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡವರುಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆ ಮಾಗಡಿ ತಾಲ್ಲೂಕಿನ ಕಲ್ಯಾ ವ್ಯವಸಾಯ ಸೇವಾ ಸಹಕಾರ ಸಂಘ ನಿ ಕಲ್ಯಾ, ಇದರ ಆಡಳಿತ ಮಂಡಳಿಯ ಸದಸ್ಯರುಗಳಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಕೆ. ಎನ್. ಸೋಮಶೇಖರ್ ಬಿನ್ ನಂಜುಂಡಯ್ಯ ಕಲ್ಯಾ,
2. ಶ್ರೀ ಶಿವರಾಮು ಬಿನ್ ಕಾಳಯ್ಯ, ಹನುಮಂತರಪುರ, ಕಾಳಾರಿ ಕಾವಲು ಅಂಚೆ,
3. ಶ್ರೀಮತಿ ಶಾಂತಮ್ಮ ಕೋಂ ಗೋಪಾಲ ರಾವ್, ಸಂಪಿಗೆ ಮರದ ಹಟ್ಟಿ,

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

ಪಿಆರ್.82

## ಅಧಿಸೂಚನೆ

### ಸಂಖ್ಯೆ: ಸಿಎಂಡಬ್ಲ್ಯೂ 77 ಸಿಎನ್‌ಎಸ್ 2000 ಬೆಂಗಳೂರು, ದಿನಾಂಕ: 6ನೇ ಜನವರಿ 2004

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 77 ಸಿಎನ್‌ಎಸ್ 2000, ದಿನಾಂಕ: 18.04.2000 ರಲ್ಲಿ ಹಾವೇರಿ ಜಿಲ್ಲೆ ಬ್ಯಾಡಗಿ ತಾಲ್ಲೂಕಿನ ಕಲ್ಲೆದೇವರ ಗ್ರಾಮದ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ, ಕಲ್ಲೆದೇವರ, ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡವರುಗಳನ್ನು ಹಾವೇರಿ ಜಿಲ್ಲೆ ಬ್ಯಾಡಗಿ ತಾಲ್ಲೂಕಿನ ಕಲ್ಲೆದೇವರ ಗ್ರಾಮದ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಕಲ್ಲೆದೇವರ ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ದಾನಪ್ಪ ವಿರೂಪಾಕ್ಷಪ್ಪ ಚೂರಿ
2. ಶ್ರೀಮತಿ ಪಾರ್ವತೆವ್ವ ಕೋಂ ಬಸವಂತಪ್ಪ ಮುದಕುಮ್ಮನವರ
3. ಶ್ರೀ ರಂಗಪ್ಪ ಕಿಮಪ್ಪ ಲಮಾಣಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಎಸ್. ಹುಬ್ಬಾಚಾರಿ**
ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

ಪಿಆರ್.83

## ಅಧಿಸೂಚನೆ

### ಸಂಖ್ಯೆ: ಸಿಎಂಡಬ್ಲ್ಯೂ 128 ಸಿಎನ್‌ಎಸ್ 2001 ಬೆಂಗಳೂರು, ದಿನಾಂಕ: 21ನೇ ಜನವರಿ 2004

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 128 ಸಿಎನ್‌ಎಸ್ 2001, ದಿನಾಂಕ: 22.03.2001 ರ ಅನುಬಂಧದ ಕ್ರಮಸಂಖ್ಯೆ 01ರಲ್ಲಿ ಉತ್ತರ ಕನ್ನಡ ಜಿಲ್ಲೆ ಸಿದ್ದಾಪುರ ತಾಲ್ಲೂಕಿನ ಬಿಳಗಿ ಸೇವಾ ಸಹಕಾರ ಬ್ಯಾಂಕ್ ನಿ., ಬಿಳಗಿ ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡವರುಗಳನ್ನು ಉತ್ತರ ಕನ್ನಡ ಜಿಲ್ಲೆ ಸಿದ್ದಾಪುರ ತಾಲ್ಲೂಕಿನ ಬಿಳಗಿ ಸೇವಾ ಸಹಕಾರ ಬ್ಯಾಂಕ್ ನಿ., ಬಿಳಗಿ ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ರಾಮ ಕನ್ನ ಮಡಿವಾಳ, ಅಂಚೆ ಮತ್ತು ಸ್ಥಳ ಬಿಳಗಿ, ಸಿದ್ದಾಪುರ ತಾಲ್ಲೂಕು
2. ಶ್ರೀ ನಾರಾಯಣಹನುಮಂತ ಮಡಗಾಂವಕರ್, ಅಂಚೆ ಮತ್ತು ಸ್ಥಳ ಬಿಳಗಿ, ಸಿದ್ದಾಪುರ ತಾಲ್ಲೂಕು
3. ಶ್ರೀಮತಿ ಸುನಂದ ಎಲ್ ನಾಯ್ಕ, ಸಾ: ಕಳೂರು, ಬಿಳಗಿ ಅಂಚೆ, ಸಿದ್ದಾಪುರ ತಾಲ್ಲೂಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಎಸ್. ಹುಬ್ಬಾಚಾರಿ**
ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

ಪಿಆರ್.84

## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ನಅಇ 394 ಬೆಮಪ್ರಾ 2003 ಬೆಂಗಳೂರು, ದಿನಾಂಕ: 28ನೇ ಜನವರಿ 2004

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 4(ಸಿ)(3) (i)(ii)(iii)(iv) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬಾದಾಮಿ ಪಟ್ಟಣದ ಸ್ಥಳೀಯ ಯೋಜನಾ ಪ್ರಾಧಿಕಾರಕ್ಕೆ ಈ ಕೆಳಕಂಡವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

1) ಡಾ: ಆರ್. ಸಿ. ಭಂಡಾರಿ - ಅಧ್ಯಕ್ಷರು
2) ಶ್ರೀ ಶಿವಪ್ಪ ವಡ್ಡರ - ಸ್ಥಳೀಯ ಸಂಸ್ಥೆಯ ಪ್ರತಿನಿಧಿ
3) ಶ್ರೀ ಇಷ್ಟಲಿಂಗ್ ಶಿರಶಿ - ಸದಸ್ಯರು
4) ಶ್ರೀಮತಿ ಉಮಾಶಿವಪ್ಪ ಅಂಗಡಿ - ಸದಸ್ಯರು
5) ಶ್ರೀ ಅಶೋಕ ಹೆಬ್ಬಳೆಪ್ಪ ಪೂಜಾರ - ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ಶ್ರೀಧರಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿಆರ್.85

**ಅಧಿಸೂಚನೆ**

**ಸಂಖ್ಯೆ: ನಅಇ 36 ಎಂಎಲ್ಆರ್ 2002 (B-32) ಬೆಂಗಳೂರು, ದಿನಾಂಕ: 31ನೇ ಜನವರಿ 2004**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಗುಂಡ್ಲುಪೇಟೆ ಪುರಸಭೆಗೆ ಸರ್ಕಾರವು ಅಧಿಸೂಚನೆ ಸಂಖ್ಯೆ: ನಅಇ 36 ಎಂಎಲ್ಆರ್. 2002 (B-32) ದಿನಾಂಕ: 13.06.2002 ರಲ್ಲಿ ಹೊರಡಿಸಿರುವ ಆದೇಶವನ್ನು ಭಾಗಶಃ ಮಾರ್ಪಡಿಸಿ ಕ್ರಮ ಸಂಖ್ಯೆ 4 ಶ್ರೀ ಸಿದ್ದರಾಜು ಬಿನ್ ಶ್ರೀ ಗೋಪಾಲಯ್ಯ, 4ನೇ ವಾರ್ಡ್, ಹೊಸೂರು ರಸ್ತೆ, ಗುಂಡ್ಲುಪೇಟೆ ಟೌನ್ ಇವರ ಸದಸ್ಯತ್ವವನ್ನು ರದ್ದುಪಡಿಸಿ ಅವರ ಬದಲಿಗೆ ಶ್ರೀ ವೆಂಕಟರಾಮು, ಬಿನ್ ಗಿರಿಯಯ್ಯ, ಅಂಬೇಡ್ಕರ್ ವೃತ್ತ, ಗುಂಡ್ಲುಪೇಟೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ಸರ್ಕಾರ ನಾಮ ನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಗದೀಶ್ ಜೋಯಿಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿಆರ್.86

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 133 ಸಿಎಸ್ಎಸ್ 2003 ಬೆಂಗಳೂರು, ದಿನಾಂಕ: 17ನೇ ಜನವರಿ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮ ನಿರ್ದೇಶನವನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆ, ಮಾಗಡಿ ತಾಲ್ಲೂಕಿನ ಅಗಲಕೋಟೆ, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿಯಮಿತ, ಅಗಲಕೋಟೆ ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ರಾಮಕೃಷ್ಣಯ್ಯ ಬಿನ್ ಕೆಂಚಪ್ಪ, ಪೂಜಾರಿ ಪಾಳ್ಯ,
2. ಶ್ರೀ ನಂಜಯ್ಯ ಬಿನ್ ನಂಜಯ್ಯ, ಎ. ಕೆ. ಕಾಲೋನಿ, ಅಗಲಕೋಟೆ
3. ಶ್ರೀಮತಿ ಗಂಗಮ್ಮ ಕೋಂ ನಾಗರಾಜು, ಮಠದ ಪಾಳ್ಯ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಎಸ್. ಹುಬ್ಬಾಚಾರಿ**
ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

ಪಿಆರ್.87

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 185 ಸಿಎಸ್ಎಸ್ 2001 ಬೆಂಗಳೂರು, ದಿನಾಂಕ: 6ನೇ ಜನವರಿ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 185 ಸಿಎಸ್ಎಸ್ 2001, ದಿನಾಂಕ: 1.6.2001 ಮತ್ತು 20.3.2003 ರಲ್ಲಿ ಬಿಜಾಪುರ ಜಿಲ್ಲೆ ಮತ್ತು ತಾಲ್ಲೂಕಿನ ಬಬಲೇಶ್ವರ ಗ್ರಾಮದ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಬಬಲೇಶ್ವರ, ಇದರ ಆಡಳಿತ ಮಂಡಳಿಗೆ ಮಾಡಿದ್ದ ಎಲ್ಲಾ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡವರುಗಳನ್ನು ಬಿಜಾಪುರ ಜಿಲ್ಲೆ ಮತ್ತು ತಾಲ್ಲೂಕಿನ ಬಬಲೇಶ್ವರ ಗ್ರಾಮದ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಬಬಲೇಶ್ವರ, ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಸುರೇಶ್ ರಾವತಪ್ಪ ಮೇತ್ರಿ
2. ಪಾರ್ವತಿ ಗುರಪ್ಪ ಕುಬಕಡ್ಡಿ
3. ಪ್ರಕಾಶ ಬಸಪ್ಪ, ಇಮ್ಮನ್ನದ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ಎಸ್. ಹುಬ್ಬಾಚಾರಿ**
ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

ಪಿಆರ್.88

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 282 ಸಿಎಸ್ಎಸ್ 2001 ಬೆಂಗಳೂರು, ದಿನಾಂಕ: 17ನೇ ಜನವರಿ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 282 ಸಿಎಸ್ಎಸ್ 2001, ದಿನಾಂಕ: 27.8.2001 ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ಮಾಗಡಿ ತಾಲ್ಲೂಕಿನ ಮತ್ತಿಕೆರೆ ವ್ಯವಸಾಯ ಸೇವಾ ಸಹಕಾರ ಸಂಘ ನಿ., ಮತ್ತಿಕೆರೆ ಇದರ ಆಡಳಿತ ಮಂಡಳಿಗೆ

ಮಾಡಿದ್ದ ಶ್ರೀ ವೆಂಕಟೇಶ ಬಿನ್ ರಾಮಾಬೋವಿ, ಏಳಿಗೆಹಳ್ಳಿ ಕಾಲೋನಿ ರವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರೆದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶ್ರೀ ಶಾಂತಪ್ಪ ಬಿನ್ ಚಿನ್ನಸ್ವಾಮಿ, ಏಳಿಗೆಹಳ್ಳಿ, ಹರಿಜನ ಕಾಲೋನಿ ಇವರನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆ ಮಾಗಡಿ ತಾಲ್ಲೂಕಿನ ಮತ್ತಿಕೆರೆ ವ್ಯವಸಾಯ ಸೇವಾ ಸಹಕಾರ ಸಂಘ ನಿ, ಮತ್ತಿಕೆರೆ, ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ಹುಚ್ಚಾಚಾರಿ**

ಪಿಆರ್.89 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಒಸಾಇ 203 ಪಿಎಂಎಸ್ 2003 ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ 2004

1872ರ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ ಕಾಯಿದೆಯ 6 ಮತ್ತು 9ನೇ ಕಲಂನಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಇಂಡಿಯನ್ ಕ್ರಿಶ್ಚಿಯನ್ ಮ್ಯಾರೇಜ್ (ಕರ್ನಾಟಕ) ನಿಯಮಗಳು 1961 ರಂತೆ ಕಾರ್ಯನಿರ್ವಹಿಸಲು ಪಾಸ್ಟರ್. ಎ.ಜಿ.ಬಿ. ಪ್ರಕಾಶ್, ಫಸ್ಟ್ ಫೈಥ್ ಬ್ಯಾಪ್ಟಿಸ್ಟ್ ಚರ್ಚ್ ಸೊಸೈಟಿ (ರಿ), ನಂ.10, 1ನೇ ಅಡ್ಡರಸ್ತೆ, ಅಶೋಕಪುರಂ, ಯಶವಂತಪುರ, ಬೆಂಗಳೂರು-560022 ಇವರಿಗೆ ಮೇಲಿನ ಕಾಯಿದೆಯಡಿಯಲ್ಲಿ ಕರ್ನಾಟಕದಲ್ಲಿ ವಿವಾಹ ವಿಧಿಯನ್ನು ನೆರವೇರಿಸಲು ಪರವಾನಿಗೆಯನ್ನು ಈ ಮೂಲಕ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಎಸ್. ಕಾಂತರಾಜು**

ಪಿಆರ್.90 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ. (ರಹದಾರಿ ಮತ್ತು ವಿದೇಶಿಯರು).

## ಸಮಾಜ ಕಲ್ಯಾಣ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಸಕಇ 40 ಬಿಎಂಎಸ್ 2004 ಬೆಂಗಳೂರು, ದಿನಾಂಕ: 28ನೇ ಜನವರಿ 2004

ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ ನಿಯಮಾವಳಿಗಳ (Articles of Association) 11(2)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ. ಎಲ್. ನರೇಂದ್ರ ಸಂಖ್ಯೆ: 29, 4ನೇ ಅಡ್ಡ ರಸ್ತೆ ಲಾಲ್‌ಜಿನಗರ, ಲಕ್ಕಸಂದ್ರ ಬೆಂಗಳೂರು, ಇವರನ್ನು ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ, ನಿಯಮಿತದ ಮಂಡಳಿಯ ನಿರ್ದೇಶಕರನ್ನಾಗಿ ಶ್ರೀ ಶಂಬುಗೌಡ ಇವರ ಸ್ಥಾನದಲ್ಲಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಪ್ರಾಣದೇವ**

ಪಿಆರ್.91 ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## ಸಹಕಾರ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಸಿಎಂಡಬ್ಲ್ಯೂ 364 ಸಿಎನ್‌ಎಸ್ 2000 ಬೆಂಗಳೂರು, ದಿನಾಂಕ: 21ನೇ ಜನವರಿ 2004

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 364 ಸಿಎನ್‌ಎಸ್ 2000 ದಿನಾಂಕ: 22.8.2000 ರಲ್ಲಿ ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನ ಎಸ್. ಐ. ಹೊನ್ನಲಗೇರಿ ರೇಷ್ಮೆ ಬೆಳೆಗಾರರ ಹಾಗೂ ರೈತರ ಸೇವಾ ಸಹಕಾರ ಬ್ಯಾಂಕ್ ನಿ., ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಶಿವಣ್ಣ ಬಿನ್ ಸುಬ್ಬಯ್ಯ ಹೊನ್ನಲಗೇರಿ ಮತ್ತು ಶ್ರೀ ಶಿವಣ್ಣ ಬಿನ್ ಚಿಕ್ಕ ಮೂಗೇಗೌಡ ಹೊನ್ನಲಗೇರಿ ರವರ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶ್ರೀ ಇಂದ್ರಕುಮಾರ್ ಬಿನ್ ಈರೇಗೌಡ ಉ: ಚಿಕ್ಕೋನು, ಹೊನ್ನಲಗೆರೆ ಮತ್ತು ಶ್ರೀ ಕಾಳಯ್ಯ, ಬಿನ್ ಕಾಳಯ್ಯ, ಮಾಜಿ ಗ್ರಾಮ ಪಂಚಾಯ್ತಿ ಸದಸ್ಯರು, ಹೊನ್ನಲಗೆರೆ ಇವರುಗಳನ್ನು ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನ ಎಸ್. ಐ. ಹೊನ್ನಲಗೇರಿ ರೇಷ್ಮೆ ಬೆಳೆಗಾರರ ಹಾಗೂ ರೈತರ ಸೇವಾ ಸಹಕಾರ ಬ್ಯಾಂಕ್ ನಿ., ಇದರ ಆಡಳಿತ ಮಂಡಳಿಯ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಸ್. ಹುಚ್ಚಾಚಾರಿ**

ಪಿಆರ್.92 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 33 ರಾಶಾಪ್ರ 2003, ಬೆಂಗಳೂರು ದಿನಾಂಕ: 31ನೇ ಜನವರಿ 2004**

ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಲಿ ಅಧಿನಿಯಮ, 1966 (1966ರ 16) ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲು ಆದೇಶಿಸಲಾಗಿದೆ.

## ಕರ್ನಾಟಕ ಪೌಢ ಶಿಕ್ಷಣ ಪರೀಕ್ಷಾ ಮಂಡಲಿ ಅಧಿನಿಯಮ, 1966

### ಪ್ರಕರಣಗಳ ಅನುಕ್ರಮಣಿಕೆ

### ಪ್ರಸ್ತಾವನೆ

ಪ್ರಕರಣಗಳು:

1. ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ
2. ಪರಿಭಾಷೆಗಳು
3. ಮಂಡಲಿಯ ನಿಗಮನ
4. ಮಂಡಲಿಯ ರಚನೆ
5. ಸದಸ್ಯರ ಪದಾವಧಿ
6. ಸದಸ್ಯರ ಅನರ್ಹತೆಗಳು
7. ಕೋ-ಆಪ್ಟ್ ಮಾಡಿಕೊಂಡ ವ್ಯಕ್ತಿಗಳ ಅನರ್ಹತೆಗಳು
8. ಅನರ್ಹತೆಗಳ ಕಾರಣದಿಂದ ಉಂಟಾಗುವ ಖಾಲಿಸ್ಥಾನ
9. ಗೈರುಹಾಜರಿಯ ಕಾರಣದಿಂದ ಉಂಟಾಗುವ ಖಾಲಿಸ್ಥಾನ
10. ಖಾಲಿಸ್ಥಾನವನ್ನು ಪ್ರಕಟಿಸುವುದು
11. ಸದಸ್ಯತ್ವದಿಂದ ತೆಗೆದುಹಾಕುವುದು
12. ಮಂಡಲಿಯ ಸದಸ್ಯರ ರಾಜೀನಾಮೆ
13. ಸಾಂದರ್ಭಿಕ ಖಾಲಿ ಸ್ಥಾನಗಳು
14. ಮಂಡಲಿಯೊಂದಿಗೆ ವ್ಯಕ್ತಿಗಳ ತಾತ್ಕಾಲಿಕ ಸಂಯೋಜನೆ, ಇತ್ಯಾದಿ
15. ಮಂಡಲಿಯ ಅಧಿಕಾರಗಳು ಮತ್ತು ಕರ್ತವ್ಯಗಳು
16. ಮಂಡಲಿಯ ಸಭೆಗಳು
17. ಅಧ್ಯಕ್ಷನ ಅಧಿಕಾರಗಳು ಮತ್ತು ಕರ್ತವ್ಯಗಳು
18. ಕಾರ್ಯದರ್ಶಿಯ ನೇಮಕಾತಿ, ಅಧಿಕಾರಗಳು ಮತ್ತು ಕರ್ತವ್ಯಗಳು
19. ಇತರ ಅಧಿಕಾರಿಗಳ ಮತ್ತು ನೌಕರರ ನೇಮಕಾತಿ, ಇತ್ಯಾದಿ
20. ಸಿಬ್ಬಂದಿಯ ಸಂಬಳ ಮತ್ತು ಭತ್ಯೆಗಳು
21. ಪರೀಕ್ಷಕರ ಸಮಿತಿ
22. ಇತರ ಸಮಿತಿಗಳು
23. ದುರ್ನಡತೆ ಅಥವಾ ನಿರ್ಲಕ್ಷ್ಯಕ್ಕಾಗಿ ಪರೀಕ್ಷಕರ ನೇಮಕಾತಿಯನ್ನು ಕೊನೆಗೊಳಿಸುವುದು
24. ಮಂಡಲಿಯ ನಿಧಿ
25. ವಾರ್ಷಿಕ ಲೆಕ್ಕಪತ್ರಗಳು ಮತ್ತು ಹಣಕಾಸು ಅಂದಾಜುಗಳು
26. ಮಂಡಲಿಯ ವಿನಿಯಮ ರಚನಾಧಿಕಾರ
27. ವಿನಿಯಮಗಳಿಗೆ ರಾಜ್ಯ ಸರ್ಕಾರದ ಅನುಮೋದನೆ
28. ಮೊದಲ ವಿನಿಯಮಗಳು ಮತ್ತು ಉಪವಿಧಿಗಳ ರಚನೆ
29. ವಿಶ್ವವಿದ್ಯಾನಿಲಯದ ಪ್ರತಿನಿಧಿಗಳ ಮೊದಲ ನೇಮಕಾತಿ

30. ಖಾಲಿ ಸ್ಥಾನಗಳು, ಇತ್ಯಾದಿಗಳ ಕಾರಣದಿಂದಾಗಿ ವ್ಯವಹರಣೆಗಳು ಅಸಿಂಧುವಾಗದಿರುವುದು
31. ಉಪವಿಧಿಗಳನ್ನು ರಚಿಸಲು ಮಂಡಲಿಯ ಅಧಿಕಾರ
32. ಮಂಡಲಿಯು ಒದಗಿಸಬೇಕಾದ ಮಾಹಿತಿ, ವಿವರ ಪಟ್ಟಿಕೆಗಳು, ಇತ್ಯಾದಿ
33. ರಾಜ್ಯ ಸರ್ಕಾರದ ಅಧಿಕಾರಗಳು
34. ನಿಯಮ ರಚನಾಧಿಕಾರ
35. ಅಧ್ಯಕ್ಷ , ಉಪಾಧ್ಯಕ್ಷ ಮತ್ತು ಸದಸ್ಯರ ಜವಾಬ್ದಾರಿ
36. ಅಧ್ಯಕ್ಷ , ಉಪಾಧ್ಯಕ್ಷ , ಮೊದಲಾದವರು ಲೋಕ ನೌಕರರಾಗಿರುವುದು
37. ಸದ್ಭಾವನೆಯಿಂದ ಮಾಡಿದ ಕಾರ್ಯಗಳಿಗಾಗಿ ದಾವೆಗಳ ಪ್ರತಿಷೇಧ, ಇತ್ಯಾದಿ
38. ದಾವೆಗಳಿಗಾಗಿ ಮುಂಚಿನ ನೋಟೀಸು, ಇತ್ಯಾದಿ
39. ತೊಂದರೆಗಳ ನಿವಾರಣೆ
40. ನಿರಸನ
41. (ಬಿಟ್ಟುಬಿಡಲಾಗಿದೆ.)

## ಅಧಿಸೂಚನೆಗಳು

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

### I

**1966ರ ಅಧಿನಿಯಮ 16:–** ಪ್ರಸ್ತುತ, ಸಾರ್ವಜನಿಕ ಶಿಕ್ಷಣ ಇಲಾಖೆಯ ಭಾಗವಾಗಿರುವ ಪರೀಕ್ಷಾ ಘಟಕವೊಂದು ಎಸ್.ಎಸ್.ಎಲ್.ಸಿ. ಪರೀಕ್ಷೆಯೂ ಸೇರಿದಂತೆ ಸುಮಾರು 67 ಸಾರ್ವಜನಿಕ ಪರೀಕ್ಷೆಗಳನ್ನು ನಡೆಸುತ್ತದೆ.

ಎಸ್.ಎಸ್.ಎಲ್.ಸಿ. ಪರೀಕ್ಷೆ ಹಾಗೂ ಇತರ ಸಾರ್ವಜನಿಕ ಪರೀಕ್ಷೆಗಳನ್ನು ಸಮರ್ಥವಾಗಿ ನಡೆಸುವುದಕ್ಕಾಗಿ ಮತ್ತು ಫಲಿತಾಂಶವನ್ನು ಸಕಾಲಿಕವಾಗಿ ಘೋಷಿಸುವುದಕ್ಕಾಗಿ ಹಾಗೂ ಸಾರ್ವಜನಿಕ ಪರೀಕ್ಷೆಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳನ್ನು ಶೀಘ್ರ ವಿಲೇವಾರಿ ಮಾಡುವುದಕ್ಕಾಗಿ ಶಾಸನಬದ್ಧ ಅಧಿಕಾರವುಳ್ಳ ಸ್ವತಂತ್ರ ಮಂಡಲಿಯೊಂದನ್ನು ಸ್ಥಾಪಿಸುವುದು ವಿಹಿತ ಎಂದು ಭಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಮೈಸೂರು ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 27.01.1966ರ ಸಂಖ್ಯೆ: 12ರ ಪುಟ 22 ರಲ್ಲಿ ಪ್ರಕಟಿಸಲಾಗಿದೆ.)

### II

**1976ರ ತಿದ್ದುಪಡಿ ಅಧಿನಿಯಮ 9:–** 1966ರ ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಲಿ ಅಧಿನಿಯಮದ 25ನೇ ಪ್ರಕರಣದ (3)ನೇ ಉಪ-ಪ್ರಕರಣದ ವಿವರಣೆಯ ಮೇರೆಗೆ, ವರ್ಷ ಎಂದರೆ ಆಗಸ್ಟ್ ಮೊದಲನೇ ದಿನದಿಂದ ಪ್ರಾರಂಭವಾಗುವ ವರ್ಷ. ಇದು, ಸರ್ಕಾರದ ಅಧಿಕೃತ ವರ್ಷದೊಂದಿಗೆ ಸರಿಹೊಂದದ ಕಾರಣ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಲಿಯ ಲೆಕ್ಕಪತ್ರಗಳನ್ನು ಸಂಕಲಿಸಲು ಅನಾನುಕೂಲವಾಗುತ್ತದೆ.

ಆದ್ದರಿಂದ, ಸರ್ಕಾರದ ಅಧಿಕೃತ ವರ್ಷಕ್ಕೆ ಸರಿಹೊಂದಿಸುವ ಸಲುವಾಗಿ, ಪ್ರತಿ ವರ್ಷ ಏಪ್ರಿಲ್ 1ನೇ ದಿನದಿಂದ ಆ ಮುಂದಿನ ಮಾರ್ಚ್ ಅಂತ್ಯದವರೆಗಿನ ವರ್ಷವನ್ನು ಮಂಡಲಿಯ ವರ್ಷವನ್ನಾಗಿ ಅಳವಡಿಸಿಕೊಳ್ಳಲು ಉದ್ದೇಶಿಸಲಾಗಿದೆ. ಈ ಬದಲಾವಣೆಯನ್ನು ಪರಂತುಕದ ಮೂಲಕ, ಕೂಡಲೇ ಜಾರಿಗೆ ತರಲು ಉದ್ದೇಶಿಸಲಾಗಿದೆ. 1975-76ನೇ ವರ್ಷಕ್ಕೆ ಸಂಬಂಧಿಸಿದಂತೆ ವರ್ಷ ಎಂದರೆ, 1975ರ ಆಗಸ್ಟ್ ಮೊದಲನೇ ದಿನದಿಂದ ಪ್ರಾರಂಭವಾಗಿ 1976ರ ಮಾರ್ಚ್ ಮೂವತ್ತೊಂದನೇ ದಿನಕ್ಕೆ ಕೊನೆಯಾಗುವ ಎಂಟು ತಿಂಗಳುಗಳ ಅವಧಿ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 31.03.1976ರ ಸಂಖ್ಯೆ: 628 ರಲ್ಲಿ ಪ್ರಕಟಿಸಲಾಗಿದೆ).

### III

**1977ರ ತಿದ್ದುಪಡಿ ಅಧಿನಿಯಮ 19:–** ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಲಿ ಅಧಿನಿಯಮ, 1966ರ 4ನೇ ಪ್ರಕರಣದ (4)ನೇ ಉಪ-ಪ್ರಕರಣದ (ಎ) ಖಂಡದ (ಎ) ಮತ್ತು (ಬಿ) ಉಪಖಂಡಗಳ ಪ್ರಕಾರ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಲಿಯು, ಇತರರೊಂದಿಗೆ, ಸಾರ್ವಜನಿಕ ಶಿಕ್ಷಣ ಇಲಾಖೆಯ ಇಬ್ಬರು ವಿಭಾಗೀಯ ಉಪ-ನಿರ್ದೇಶಕರುಗಳನ್ನು ಹಾಗೂ ಒಬ್ಬ ಜಿಲ್ಲಾ ಶಿಕ್ಷಣಾಧಿಕಾರಿಯನ್ನು ಒಳಗೊಂಡಿರತಕ್ಕದ್ದು. 1970ರ ರಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯನ್ನು ಪುನರ್ ಸಂಘಟಿಸಿದ ನಂತರ ಪ್ರತಿಯೊಂದು ರೆವಿನ್ಯೂ

ಜಿಲ್ಲೆಯ ಜಿಲ್ಲಾ ಶಿಕ್ಷಣಾಧಿಕಾರಿಯ ಬದಲಾಗಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ-ನಿರ್ದೇಶಕರ ದರ್ಜೆಯ ಒಬ್ಬ ಅಧಿಕಾರಿಯನ್ನು ಒಳಗೊಂಡಿದೆ. ಅದೇ ರೀತಿ ರೆವಿನ್ಯೂ ವಿಭಾಗಕ್ಕೆ ಸಂವಾದಿಯಾಗಿ ಪ್ರತಿಯೊಂದು ವಿಭಾಗವು ಸಾರ್ವಜನಿಕ ಶಿಕ್ಷಣ ಇಲಾಖೆಯ ವಿಭಾಗೀಯ ಉಪ-ನಿರ್ದೇಶಕರ ಬದಲಾಗಿ ಒಬ್ಬ ಜಂಟೀ ನಿರ್ದೇಶಕರು ಮುಖ್ಯಸ್ಥರಾಗಿರುತ್ತಾರೆ. ಮೇಲೆ ಉಲ್ಲೇಖಿಸಿದ ಇಬ್ಬರು ಅಧಿಕಾರಿಗಳ ಹುದ್ದೆಗಳಿಗೆ ಸಂಬಂಧಿಸಿದಂತೆ ಮಾಡಲಾದ ಬದಲಾವಣೆಗಳ ದೃಷ್ಟಿಯಿಂದ ಈ ಅಧಿನಿಯಮದಲ್ಲಿ ಕೆಲವು ಪ್ರಾಸಂಗಿಕ ತಿದ್ದುಪಡಿಗಳನ್ನು ತರುವುದು ಅವಶ್ಯವೆನಿಸಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 17.06.1977ರ ಸಂಖ್ಯೆ: 490 ರಲ್ಲಿ ಪ್ರಕಟಿಸಲಾಗಿದೆ).

## IV

**1995ರ ತಿದ್ದುಪಡಿ ಅಧಿನಿಯಮ 1:–** ವಿದ್ಯಾರ್ಥಿಗಳ ಮಾನಸಿಕ ಮತ್ತು ದೈಹಿಕ ಸಾಮರ್ಥ್ಯಗಳು ಸುಸಂಗತವಾಗಿ ಹೆಚ್ಚುವಂತೆ ಮಾಡಲು ಮತ್ತು ಅವರು ಶಿಕ್ಷಣದ ಮೂಲಕ ವೈಜ್ಞಾನಿಕ ಹಾಗೂ ಜಾತ್ಯಾತೀತ ಮನೋಭಾವವನ್ನು ಬೆಳೆಸಿಕೊಳ್ಳುವಂತೆ ಮಾಡಲು ಶಿಕ್ಷಣ ಸಂಸ್ಥೆಗಳ ಯೋಜಿತ ಅಭಿವೃದ್ಧಿ, ಆರೋಗ್ಯಕರ ಶಿಕ್ಷಣ ಪದ್ಧತಿಗೆ ಪ್ರಾಧಾನ್ಯತೆ, ಶಿಕ್ಷಣದಲ್ಲಿ ಗುಣಮಟ್ಟ ಕಾಪಾಡುವಿಕೆ ಮತ್ತು ಅದರಲ್ಲಿ ಸುಧಾರಣೆ ಮತ್ತು ರಾಜ್ಯದಲ್ಲಿ ಶಿಕ್ಷಣ ಸಂಸ್ಥೆಗಳ ಉತ್ತಮ ಸಂಘಟನೆ, ಶಿಸ್ತು ಮತ್ತು ಅವುಗಳ ಮೇಲೆ ನಿಯಂತ್ರಣ - ಇವುಗಳ ಬಗ್ಗೆ ಉಪಬಂಧ ಕಲ್ಪಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 07.07.1983ರ ಪುಟ 291 ರಲ್ಲಿ ಪ್ರಕಟಿಸಲಾಗಿದೆ).

## V

**1995ರ ತಿದ್ದುಪಡಿ ಅಧಿನಿಯಮ 18:–** ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಲಿ ಅಧಿನಿಯಮ, 1966ರ 20ನೇ ಪ್ರಕರಣದ (2)ನೇ ಉಪ-ಪ್ರಕರಣವು, ಮಂಡಲಿಯ ಅಧ್ಯಕ್ಷ, ಕಾರ್ಯದರ್ಶಿ ಮತ್ತು ಇತರ ಅಧಿಕಾರಿಗಳು ಹಾಗೂ ನೌಕರರ ಸಂಬಳ, ನಿವೃತ್ತಿ ವೇತನ, ರಜೆ ಮತ್ತು ಇತರ ಭತ್ಯೆಗಳಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರವು ನಿರ್ಧರಿಸಬಹುದಾದಂಥ ಮೊತ್ತವನ್ನು ಮಂಡಲಿಯು, ಮಂಡಲಿಯ ನಿಧಿಯಿಂದ ಪ್ರತಿ ವರ್ಷ ರಾಜ್ಯ ಸರ್ಕಾರಕ್ಕೆ ಸಂದಾಯ ಮಾಡಲು ಅವಕಾಶ ಕಲ್ಪಿಸುತ್ತದೆ. ಆದಾಗ್ಯೂ, ಮಂಡಲಿಯ ಅಧ್ಯಕ್ಷ, ಕಾರ್ಯದರ್ಶಿ, ಇತರ ಅಧಿಕಾರಿಗಳು ಮತ್ತು ನೌಕರರು ಸರ್ಕಾರದ ನೌಕರರಾಗಿರುವುದರಿಂದ ಮತ್ತು ಅವರು ತಮ್ಮ ವೇತನ ಮತ್ತು ಭತ್ಯೆಗಳನ್ನು ರಾಜ್ಯದ ಸಂಚಿತ ನಿಧಿಯಿಂದ ಪಡೆಯುವುದರಿಂದ, ಸದರಿ ಉಪಬಂಧವನ್ನು ಬಿಟ್ಟುಬಿಡಲು ಉದ್ದೇಶಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜ್ಯಪತ್ರ (ವಿಶೇಷ ಸಂಚಿಕೆ) ಭಾಗ IV-2ಎ, ದಿನಾಂಕ: 17.04.1995ರ ಸಂಖ್ಯೆ 464 ರಲ್ಲಿ ಪ್ರಕಟಿಸಲಾಗಿದೆ).

**2003ರ ಅಧಿನಿಯಮ ಸಂಖ್ಯೆ 13:–** ಕರ್ನಾಟಕ ಅಧಿನಿಯಮಗಳ ಇಂದಿನವರೆಗೆ ಇರುವಂತೆ ಸಂಹಿತೆಗಳ ಸಂಪುಟಗಳನ್ನು ಸಿದ್ಧಪಡಿಸುವುದು ಮತ್ತು ಪ್ರಯೋಜನ ಅವಧಿ ಪೂರೈಸಿರುವ ಎಲ್ಲ ಅಧಿನಿಯಮಗಳನ್ನು ಕಾಲಕಾಲಕ್ಕೆ ತಿದ್ದುಪಡಿ ಮಾಡಲಾದ ಅಧಿನಿಯಮಗಳನ್ನು ನಿರಸನಗೊಳಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಮೇಲಿನ ಉದ್ದೇಶಕ್ಕಾಗಿ ಸರ್ಕಾರವು ಏಕ ಸದಸ್ಯ ಸಮಿತಿಯೊಂದನ್ನು ರಚಿಸಿದೆ. ಈ ಸಮಿತಿಯು 1.11.1956 ರಿಂದ 31.12.2000 ದವರೆಗಿನ ಕರ್ನಾಟಕ ಅಧಿನಿಯಮಗಳನ್ನು ಪರಿಶೀಲಿಸಿ, ಈ ಮುಂದಿನ ಅಧಿನಿಯಮಗಳನ್ನು ನಿರಸನಗೊಳಿಸುವುದಕ್ಕಾಗಿ "ನಿರಸನಗೊಳಿಸುವ ಮತ್ತು ತಿದ್ದುಪಡಿ ಮಾಡುವ ವಿಧೇಯಕ, 2002" ಎಂಬ ಈ ವಿಧೇಯಕವನ್ನು ಪ್ರಸ್ತಾಪಿಸಿದೆ.

ಈ ವಿಧೇಯಕವು, ಅವಶ್ಯಕವೆಂದು ಭಾವಿಸಲಾದ ಕೆಲವು ಅಧಿನಿಯಮಗಳ ತಿದ್ದುಪಡಿಗಳನ್ನೂ ಸಹ ಒಳಗೊಂಡಿರುತ್ತದೆ.

ಆದ್ದರಿಂದ ಈ ವಿಧೇಯಕ.

(2002ರ ಕರ್ನಾಟಕ ವಿಧಾನ ಪರಿಷತ್ತಿನ ವಿಧೇಯಕ ಸಂಖ್ಯೆ: 4 ರಿಂದ ಪಡೆಯಲಾಗಿದೆ).

**2003ರ ತಿದ್ದುಪಡಿ ಅಧಿನಿಯಮ ಸಂಖ್ಯೆ 14:–** ಸಂಯುಕ್ತ ಕಿರಿಯ ಕಾಲೇಜನ್ನು ಮಾನ್ಯತೆ ಪಡೆದ ಪ್ರೌಢ ಶಾಲೆಯ ಅರ್ಥವ್ಯಾಪ್ತಿಯಲ್ಲಿ ಸೇರಿಸಲು ಮತ್ತು ನಿರ್ದೇಶಕರು, ಪದವಿಪೂರ್ವ ಶಿಕ್ಷಣ ಅಥವಾ ಅವರ ನಾಮನಿರ್ದೇಶಿತ; ನಿರ್ದೇಶಕರು ಡಿ.ಎಸ್.ಇ.ಆರ್.ಟಿ; ನಿರ್ದೇಶಕರು, ಪ್ರೌಢ ಶಿಕ್ಷಣ ಮತ್ತು ಇತರ ಪರೀಕ್ಷೆಗಳ ಮಂಡಲಿಯ ಪ್ರಭಾರದಲ್ಲಿರುವ ನಿರ್ದೇಶಕರನ್ನು ಮಂಡಲಿಯ ಪದನಿಮಿತ್ತ ಸದಸ್ಯರನ್ನಾಗಿ ಸೇರಿಸಲು ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಲಿ ಅಧಿನಿಯಮ, 1966ನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(2002ರ ಕರ್ನಾಟಕ ವಿಧಾನ ಪರಿಷತ್ತಿನ ವಿಧೇಯಕ ಸಂಖ್ಯೆ 8 ರಿಂದ ಪಡೆಯಲಾಗಿದೆ).

# 1966ರ [1][ಕರ್ನಾಟಕ][1] ಅಧಿನಿಯಮ ಸಂಖ್ಯೆ 16

(1966ರ ಮೇ 5ನೇ ದಿನಾಂಕದಂದು [1][ಕರ್ನಾಟಕ][1] ರಾಜ್ಯಪತ್ರದಲ್ಲಿ ಮೊದಲು ಪ್ರಕಟಿತವಾಗಿದೆ.)

# [1][ಕರ್ನಾಟಕ][1] ಪ್ರೌಢ ಶಿಕ್ಷಣ ಪರೀಕ್ಷಾ ಮಂಡಲಿ ಅಧಿನಿಯಮ, 1966

(1966ರ ಏಪ್ರಿಲ್ 27ನೇ ದಿವಸದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಿತು.)

(1976ರ 9, 1977ರ 19, 1995ರ 1, 2002ರ 13 ಮತ್ತು 2003ರ 14ರ ಮೂಲಕ ತಿದ್ದುಪಡಿಯಾದಂತೆ.)

[1][ಕರ್ನಾಟಕ ರಾಜ್ಯ][1] ಕ್ಕಾಗಿ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಲಿಯನ್ನು ಸ್ಥಾಪಿಸಲು ಉಪಬಂಧಿಸುವ ಅಧಿನಿಯಮ.

ಕೆಲವು ಸಾರ್ವತ್ರಿಕ ಪರೀಕ್ಷೆಗಳನ್ನು ನಡೆಸುವ ಮತ್ತು ನಿರ್ವಹಿಸುವ ಉದ್ದೇಶಕ್ಕಾಗಿ ಒಂದು ಮಂಡಲಿಯನ್ನು ಸ್ಥಾಪಿಸುವುದು ವಿಹಿತವಾಗಿರುವುದರಿಂದ;

ಭಾರತ ಗಣರಾಜ್ಯದ ಹದಿನೇಳನೇ ವರ್ಷದಲ್ಲಿ [1][ಕರ್ನಾಟಕ][1] ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗತಕ್ಕದ್ದು:-

1. **ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ:-** (1) ಈ ಅಧಿನಿಯಮವನ್ನು [1][ಕರ್ನಾಟಕ][1]ಪ್ರೌಢ ಶಿಕ್ಷಣ ಪರೀಕ್ಷಾ ಮಂಡಲಿ ಅಧಿನಿಯಮ, 1966 ಎಂದು ಕರೆಯತಕ್ಕದ್ದು.

(2) ಇದು ಇಡೀ [1][ಕರ್ನಾಟಕ ರಾಜ್ಯ][1] ಕ್ಕೆ ವ್ಯಾಪ್ತವಾಗುತ್ತದೆ.

[1][(3) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ [2][ದಿನಾಂಕ][2]ದಂದು ಜಾರಿಗೆ ಬರತಕ್ಕದ್ದು.

2. **ಪರಿಭಾಷೆಗಳು:-** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) "ಮಂಡಲಿ" ಎಂದರೆ ಈ ಅಧಿನಿಯಮದ ಅಡಿಯಲ್ಲಿ ರಚಿಸಿದ [1][ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಲಿ;][1]

(ಬಿ) "ಉಪವಿಧಿಗಳು" ಎಂದರೆ ಈ ಅಧಿನಿಯಮದ ಅಡಿಯಲ್ಲಿ ಮಂಡಲಿಯು ರಚಿಸಿದ ಉಪವಿಧಿಗಳು;

(ಸಿ) "ಅಧ್ಯಕ್ಷ" ಎಂದರೆ ಮಂಡಲಿಯ ಅಧ್ಯಕ್ಷರು;

(ಡಿ) "ಸಮಿತಿ" ಎಂದರೆ ಈ ಅಧಿನಿಯಮದ ಮೇರೆಗೆ ನೇಮಿಸಲಾದ ಸಮಿತಿ;

[3][(ಡಿಎ) "ನಿರ್ದೇಶಕ" ಎಂದರೆ ಮಂಡಲಿಯ ನಿರ್ದೇಶಕರು;][3]

(ಇ) "ಪರೀಕ್ಷೆ" ಎಂದರೆ ಮಂಡಲಿಯು ನಡೆಸುವ ಪರೀಕ್ಷೆ;

(ಎಫ್) "ಪರೀಕ್ಷಕ" ಎಂಬುದು ಮುಖ್ಯ ಪರೀಕ್ಷಕ, ಜಂಟಿ ಮುಖ್ಯ ಪರೀಕ್ಷಕ, ಉಪ ಮುಖ್ಯ ಪರೀಕ್ಷಕ ಮತ್ತು ಪ್ರಶ್ನೆಪತ್ರಿಕೆಯನ್ನು ಸಿದ್ಧಪಡಿಸುವವನನ್ನು ಒಳಗೊಳ್ಳುತ್ತದೆ;

(ಜಿ) "ಮುಖ್ಯೋಪಾಧ್ಯಾಯ" ಅಥವಾ 'ಮುಖ್ಯೋಪಾಧ್ಯಾಯಿನಿ' ಎಂದರೆ, ಅವರನ್ನು ಯಾವ ಹೆಸರಿನಿಂದಲಾದರೂ ಕರೆಯಲಿ, ಮನ್ನಣೆ ಪಡೆದ ಪ್ರೌಢಶಾಲೆಯ ಬೋಧಕ ಸಿಬ್ಬಂದಿಯ ಮುಖ್ಯಸ್ಥರು;

(ಎಚ್) "ಅಧಿಸೂಚನೆ" ಎಂದರೆ ರಾಜ ಪತ್ರದಲ್ಲಿ ಪ್ರಕಟಿಸಲಾದ ಅಧಿಸೂಚನೆ;

(ಐ) "ನಿಯಮಿಸಲಾದುದು" ಎಂದರೆ ಈ ಅಧಿನಿಯಮದ ಮೇರೆಗೆ ರಾಜ್ಯ ಸರ್ಕಾರವು ರಚಿಸಿದ ನಿಯಮಗಳ ಮೂಲಕ ನಿಯಮಿಸಲಾದುದು;

(ಜೆ) "ಮನ್ನಣೆ ಪಡೆದ ಪ್ರೌಢಶಾಲೆ" ಎಂದರೆ ಕರ್ನಾಟಕದ [1][ಸಾರ್ವಜನಿಕ ಶಿಕ್ಷಣ ನಿರ್ದೇಶಕ][1] ರಿಂದ ಅಥವಾ ಈ ಬಗ್ಗೆ ಅವರು ಅಧಿಕೃತಗೊಳಿಸಿದ ಅಧಿಕಾರಿಯಿಂದ ಮನ್ನಣೆ ಪಡೆದ ಪ್ರೌಢಶಾಲೆ, ಉನ್ನತ ಪ್ರೌಢ ಶಿಕ್ಷಣ ಶಾಲೆ [4][ಸಂಯುಕ್ತ ಕಿರಿಯ ಕಾಲೇಜು][4] ವಿವಿಧೋದ್ದೇಶ ಪ್ರೌಢಶಾಲೆ ಅಥವಾ ಕಿರಿಯ ತಾಂತ್ರಿಕ ಶಾಲೆ;

(ಕೆ) "ವಿನಿಮಯಗಳು" ಎಂದರೆ ಈ ಅಧಿನಿಯಮದ ಮೇರೆಗೆ ಮಂಡಲಿಯು ರಚಿಸಿದ ವಿನಿಮಯಗಳು;

---

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ 1-11-1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. ಈ ಅಧಿನಿಯಮವು 5ನೇ ಅಕ್ಟೋಬರ್ 1966ರಂದು ಅಧಿಸೂಚನೆಯ ಮೂಲಕ ಜಾರಿಗೆ ಬಂದಿದೆ. ಅಧಿಸೂಚನೆಯ ಪಾಠವು ಪುಟ 13 ರಲ್ಲಿ ಇದೆ.
3. 1995ರ ಅಧಿನಿಯಮ ಸಂಖ್ಯೆ 1 ರ ಮೂಲಕ 1.6.1995 ರಿಂದ ಜಾರಿಗೆ ಬರುವಂತೆ ಅಧಿಸೂಚನೆಯ ಮೂಲಕ ಸೇರಿಸಲಾಗಿದೆ.ಅಧಿಸೂಚನೆಯ ಪಾಠವು ಪುಟ 13 ರಲ್ಲಿ ಇದೆ.
4. 2003ರ ಅಧಿನಿಯಮ ಸಂಖ್ಯೆ: 14ರ ಮೂಲಕ 3.4.2003 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

